ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಗೌರವ ಡಾಕ್ಟರೇಟ್ ನೀಡಿಕೆಯಲ್ಲಿ ದುರ್ಬಳಕೆ ಮಾರಾಟ ಜಾಲ ಕುರಿತು

ಡಾ. ತೇಜಸ್ವಿನಿ ಗೌಡ(ವಿಧಾನಸಭೆಯಿಂದ ಚುನಾಯಿತರಾದವರು) –

15 (167) ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮ ಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕರ್ನಾಟಕ ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಗೌರವ ಡಾಕ್ಟರೇಟ್ ನೀಡಲು ಇರುವ ಮಾನದಂಡಗಳೇನು;

(ಆ) ಕರ್ನಾಟಕದಲ್ಲಿ ಗೌರವ ಡಾಕ್ಟರೇಟ್ ಪಡೆದಿರುವವರ ಸಂಖ್ಯೆ ಎಷ್ಟು; (ಹೆಸರು, ಸಾಧನೆ ಕ್ಷೇತ್ರದ ಪೂರ್ಣ ಮಾಹಿತಿ ಒದಗಿಸುವುದು)

(ಇ) ಹೊರ ರಾಜ್ಯಗಳಿಂದ ಹೊರದೇಶಗಳಿಂದ ಅಲ್ಲಿನ ವಿಶ್ವವಿದ್ಯಾಲಯಗಳಿಂದ ಅರ್ಹತೆ ಇಲ್ಲದವರಿಗೂ ಕರ್ನಾಟಕದಲ್ಲಿ ಡಾಕ್ಟರೇಟ್ ಪಡೆದಿರುವವರ ಮಾಹಿತಿ ಲಭ್ಯವಿದೆಯೇ; (ಅಂತಹವರುಗಳ ದಾಖಲಾತಿಯೊಂದಿಗೆ ವಿವರಗಳನ್ನು ಒದಗಿಸುವುದು)

(ಈ) ಯಾವುದೇ ಅರ್ಹ ಮಾನದಂಡವಿಲ್ಲದೆ ಡಾಕ್ಟರೇಟ್ ಖರೀದಿಸಿ ಅದರ ದುರ್ಬಳಕೆಯಿಂದ ಸಮಾಜದಲ್ಲಿ ಆಗುತ್ತಿರುವ ದುಷ್ಪರಿಣಾಮ ತಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು?